ಡಾ|| ಎಸ್. ಎಲ್. ಶಾಂತಕುಮಾರಿ

# ತಂಬೂರ ಶಾಸನ

ತಂಬೂರು, ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಒಂದು ಚಿಕ್ಕ ಹಳ್ಳಿ. ಇಲ್ಲಿ ಉಪಸ್ಥಿತವಿರುವ ದೇವಾಲಯ, ಮೂರ್ತಿಶಿಲ್ಪಗಳು ಮತ್ತು ಹಲವು ಶಾಸನಗಳಿಂದ ಹಿಂದೆ ಇದು ಒಂದು ಹೆಸರಾಂತ ಸ್ಥಳ ವಾಗಿತ್ತೆಂದು ತಿಳಿದುಬರುತ್ತದೆ. ಕೆಲದಿನಗಳ ಹಿಂದೆ ಕಲಘಟಗಿಯ ಅನ್ವೇಷಣೆಯ ಕಾಲಕ್ಕೆ ನನಗೆ ಇಲ್ಲಿ ಹಲವು ಶಾಸನಗಳು ದೊರೆತಿದ್ದು, ಅವುಗಳಲ್ಲಿ ಹಲವು ಮಹತ್ವಪೂರ್ಣ ಮಾಹಿತಿಯನ್ನು ಒದಗಿಸುತ್ತವೆ. ಅಂಥವುಗಳಲ್ಲಿ ಒಂದನ್ನು ಕುರಿತು ಪ್ರಸ್ತಾಪಿಸುವುದು ಈ ಲೇಖನದ ಉದ್ದೇಶವಾಗಿದೆ.

ಈ ಊರಿನ ಶ್ರೀ ನಂದಿಕಟ್ಟಿ ಸಾಹೇಬ್ ಎನ್ನುವವರ ಹೊಲದಲ್ಲಿ ಹುಗಿಯಲ್ಪಟ್ಟಿದ್ದ ಈ ಶಾಸನವು ಸು. ೧ ಮಿ. ೧೨ ಸೆಂ.ಮಿ. ಉದ್ದ ಮತ್ತು ೧ ಮಿ. ೨ ಸೆಂ. ಮಿ. ಅಗಲವಿದ್ದು, ಇದರಲ್ಲಿ ೬೨ ಸಾಲುಗಳಿವೆ. ಶಾಸನದ ಮೇಲ್ಭಾಗ ಮತ್ತು ಕೆಳಗಿನ ಭಾಗವು ಒಡೆದು ಹೋಗಿರುವುದರಿಂದ ಶಾಸನದ ಪಾಠ ಅಪೂರ್ಣವಾಗಿದೆ.

ಮೊದಲಿಗೆ, ಮಲ್ಲಪ್ಪದಂಡನಾಯಕ ಎಂಬುವನ ಆಳ್ವಿಕೆಯ ಬಗ್ಗೆ ಹೇಳುವ ಈ ಶಾಸನದಲ್ಲಿ ಸಾಮನ್ತಕಗ್ಗ ಎನ್ನುವ ಒಬ್ಬ ಅಧಿಕಾರಿಯನ್ನು ಕುರಿತು ಹೇರಳವಾದ ವರ್ಣನೆಯಿದೆ. ಇದರಿಂದ ಇವನು ಅತ್ಯಂತ ಪರಾಕ್ರಮಿ ಹಾಗೂ ಉದಾರಿ ಎಂದು ತಿಳಿದುಬರುತ್ತದೆ.ಕದಂಬ ವೀರ ಪೆರ್ಮಾಡಿಯ ಸಾಮನ್ತನಾಗಿದ್ದ ಇವನ ವಂಶಾವಳಿಯ ಬಗ್ಗೆಯೂ ಮಾಹಿತಿ ನೀಡುವ ಈ ಶಾಸನವು ಸಾಮನ್ತ ಕಗ್ಗನು ತನ್ನ ಒಡೆಯನಾದ ವೀರ ಪೆರ್ಮಾಡಿಯ ಹೆಸರಿನಲ್ಲಿ ಪೆರ್ಮ್ಮೇಶ್ವರ ಎಂಬ ದೇವಾಲಯವನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಶಬ್ದಸಂಖ್ಯೆಯಲ್ಲಿ ಹೇಳಲಾಗಿರುವ ಈ ಶಾಸನದ ಕಾಲ ಕ್ರಿ.ಶ.ಸು. ೧೨೧೪ ಡಿಸೆಂಬರ್ ೧೪ ಭಾನುವಾರ ಎಂದಾಗುತ್ತದೆ. ಈ ದಿನದಂದು ಸಾಮನ್ತ ಕಗ್ಗನು ತಾನು ಕಟ್ಟಿಸಿದ ಪೆರ್ಮ್ಮೇಶ್ವರ ದೇವಾಲಯಕ್ಕೆ ಮಂಗಲಾನಕರವನ್ನು, ಶಿವಶಕ್ತಿ ಬ್ರತಿನಾಥರ ಪಾದಪೂಜೆ ಮಾಡಿ, ಬಿಟ್ಟನೆಂದು ತಿಳಿದುಬರುತ್ತದೆ. ಈ ದೇವಾಲಯಕ್ಕೆ ಹಾಗೂ ಇಲ್ಲಿ ನಡೆಯುವ ವಿದ್ಯಾಭ್ಯಾಸ ಮುಂತಾದವುಗಳ ಸಲುವಾಗಿ ಊರಿನ ಗೌಡರು, ಪ್ರಭುಗಳು, ಐನೂರ್ವರು, ನಕರ ಸಮೂಹದವರು, ತೆಲ್ಲಿಗರು ಮುಂತಾದವರು ಭೂಮಿ ಹಾಗೂ ದ್ರವ್ಯ, ಎಣ್ಣೆ ಮುಂತಾದ ರೂಪದಲ್ಲಿ ದತ್ತಿ ಬಿಟ್ಟಿದ್ದು ತಿಳಿದುಬರುತ್ತದೆ.

ಈ ಶಾಸನದಲ್ಲಿ ಧಾರವಾಡದ ಹೆಸರು ಮತ್ತು ಇಲ್ಲಿದ್ದ ಒಂದು ಮಠ ಹಾಗೂ ಇಲ್ಲಿಯ ಗುರುಪರಂಪರೆ ಉಕ್ತವಾಗಿದೆ. ಈ ಮಠದ ಗುರುಪರಂಪರೆ ಹೀಗಿದೆ:

ಅಗ್ನಿಮುನೀಂದ್ರ
|
ಸೋಮೇಶ್ವರ ಕಲಿಕಾಲ
|
ಮಧ್ವರೇಶ
|
ಶಿವಶಕ್ತಿಜ್ಞಾನಿ
|
ಶಿವಸಿದ್ಧಾಂತ
|
ಯೋಗವಿಚ್ಛವಿಶಕ್ತಿ

ಶಿವಶಕ್ತಿಜ್ಞಾನಿಗಳನ್ನು ಲೋಕೋತ್ತಮನೂ ಅಕುಟಿಳ ಗುಣನಿಲಯನೂ ಶೌಚ್ಚಿಕ ತಿಳಕನೂ ಪ್ರವರ ನೈಷ್ಠಿಕಾಭರಣನೂ ಎಂದು ಮುಂತಾಗಿ ವರ್ಣಿಸುವ ಶಾಸನವು ಯೋಗವಿಚ್ಛವಿಶಕ್ತಿಯನ್ನು ಕುರಿತು ಸಕಲ ಶಾಸ್ತ್ರ ಪ್ರೌಢನೀರಜನೆಂದೂ ಯಮನಿಯಮ ಸುಚ್ಚರಿತ್ರ ಶಮದಮನಿಷ್ಠಿತ ತಪಃಪ್ರಭಾವದಿಂದ ಕೂಡಿದವನಾಗಿ ಯತಿಪತಿಗಳಿಗೆ ತಿಲಕಪ್ರಾಯನಾಗಿದ್ದನೆಂದೂ ವರ್ಣಿಸುತ್ತದೆ.

ಈ ಶಾಸನದಲ್ಲಿ ಒಂದೆರಡು ಅಂಶಗಳು ಗಮನಾರ್ಹವಾಗಿವೆ. ಉದಾಹರಣೆಗೆ, ಶಾಸನದಲ್ಲಿ ಉಕ್ತವಾಗಿರುವ ಧಾರವಾಡದ ಹೆಸರು, ಇಲ್ಲಿದ್ದ ಮಠ ಮತ್ತು ಈ ಮಠದ ಗುರುಪರಂಪರೆ. ಧಾರವಾಡದ ಹೆಸರನ್ನು ಉಲ್ಲೇಖಿಸುವ ಹಲವೇ ಶಾಸನಗಳಲ್ಲಿ ಈ ಶಾಸನವೂ ಒಂದಾಗಿದೆಯಲ್ಲದೆ, ಈ ಶಾಸನದಿಂದ ಇಲ್ಲಿದ್ದ ಮಠದ ಬಗೆಗಿನ ಉಲ್ಲೇಖವು ಮೊದಲಬಾರಿಗೆ ಬರುತ್ತದೆ. ಅದೇ ರೀತಿ ಇಲ್ಲಿಯ ಗುರುಪರಂಪರೆ. ಆದರೆ ಈ ಮಠ ಯಾವ ಮಠವನ್ನು ಕುರಿತಾಗಿದೆ ಎಂದು ತಿಳಿದುಬರುವುದಿಲ್ಲ. ಸಾಮಾನ್ಯವಾಗಿ ಮಠಗಳು ಒಂದು ದೇವಾಲಯಕ್ಕೆ ಸೇರಿದವುಗಳಾಗಿರುತ್ತವೆ. ಆದರೆ ಇಲ್ಲಿಯ ಮಠ ಯಾವ ದೇವಾಲಯಕ್ಕೆ ಹೊಂದಿಕೊಂಡಿತ್ತೆಂದು ತಿಳಿದುಬರುವುದಿಲ್ಲ. ಸಾಮಾನ್ಯವಾಗಿ ಮಠಗಳು ಕಾಲಾಮುಖ ಶೈವರಿಗೆ ಸೇರಿದವುಗಳಾಗಿರುತ್ತವೆ. ಆದರೆ ಇಲ್ಲಿ ಈ ಮಠ ಯಾವ ಪಂಗಡಕ್ಕೆ ಸೇರಿದ್ದೆಂದು ಹೇಳಲಾಗುವುದಿಲ್ಲವಾದರೂ ಮೊದಲಿಗೆ ಕಾಲಾಮುಖ ಪಂಗಡಕ್ಕೆ ಸೇರಿದ್ದ ಮಠ ಧಾರವಾಡದಲ್ಲಿದ್ದಿತೆಂದು ಹೇಳಲಾಗಿದೆ. ಇದಕ್ಕೆ ಪೂರಕವಾಗಿ ಕ್ರಿ.ಶ. ೧೧೮೧ರ ಧಾರವಾಡದ ಒಂದು ಶಾಸನದಲ್ಲಿ ಕಲ್ಯಾಣಶಕ್ತಿ ಎಂಬ ಗುರುವಿನ ಉಲ್ಲೇಖ ಬರುತ್ತದೆ. ಇದರಿಂದ ಈ ಮಠವು ಕಾಲಾಮುಖ ಪಂಗಡಕ್ಕೆ ಸೇರಿದ ಮಠವಾಗಿತ್ತೆಂದು ಊಹಿಸಬಹುದಾಗಿದೆ.

ಮತ್ತೊಂದು ಗಮನಾರ್ಹ ಸಂಗತಿ ಎಂದರೆ, ಈ ಶಾಸನದಲ್ಲಿ ವರ್ಣಿತನಾಗಿರುವ ಹಾಗೂ ಅನೇಕ ವಿಧವಾಗಿ ಹೊಗಳಿಕೆಗೆ ಪಾತ್ರನಾಗಿರುವ ಸಾಮಂತ ಕಗ್ಗನ ಬಗ್ಗೆ ಮೊದಲಬಾರಿಗೆ ಈ ಶಾಸನವು ವಿವರಣೆ ನೀಡುತ್ತದೆ.

ಈ ಶಾಸನದಲ್ಲಿ ಉಕ್ತವಾಗಿರುವ ಕಾರಗೋಡತಳ, ಬಳಗದ್ದೆ, ಹೆಗ್ಗೇರಿ ಮುಂತಾದ ಸ್ಥಳಗಳನ್ನು ಇಂದಿಗೂ ಅದೇ ಹೆಸರಿನಿಂದ ಗುರುತಿಸಬಹುದಾಗಿದೆ. ಅದೇ ರೀತಿ ಮಾವಳ್ಳಿ–೧೨, ಹುಲಿಗೋಡು–೧೨, ತಮ್ಮಿಯೂರು–೧೨ ಎಂಬ ಹೆಸರುಗಳು ಶಾಸನದಲ್ಲಿ ಕಂಡುಬರುತ್ತವೆ. ಮಾವಳ್ಳಿ ಮತ್ತು ಕಾರಗೋಡತಳ ಇಂದು ಕಾಡು ಪ್ರದೇಶವಾಗುಳಿದು ಅದೇ ಹೆಸರಿನಿಂದ ಕರೆಯಲ್ಪಡುತ್ತಿವೆ. ತಮ್ಮಿಯೂರು ಇಂದಿನ ತಂಬೂರಾದರೆ ಅದೊಂದು ಚಿಕ್ಕ ಗ್ರಾಮವಾಗಿ ಉಳಿದಿದೆ.

ಹೀಗೆ, ಮೇಲ್ಕಂಡ ಈ ವಿವರಗಳಿಂದ ತಂಬೂರಿನ ಈ ಶಾಸನವು ಒಂದು ವೈಶಿಷ್ಟ್ಯಪೂರ್ಣ ಶಾಸನವಾಗಿದೆ ಎಂದು ಹೇಳಬಹುದು.